ಡಾ॥ ಸೂರ್ಯನಾಥ ಕಾಮತ್

# ಕರ್ನಾಟಕದಲ್ಲಿ ಬಾಸೆಲ್ ಮಿಶನ್‌ನ ಸಾಧನೆ

---

ಪಾಶ್ಚಾತ್ಯರ ಪ್ರಭಾವದಿಂದ ಭಾರತದಲ್ಲಿ ಆದ ತೀವ್ರ ಬದಲಾವಣೆಗಳು ನಮಗೆ ಚಿರಪರಿಚಿತ. ಪಾಶ್ಚಾತ್ಯ ಶಿಕ್ಷಣ, ಪಾಶ್ಚಾತ್ಯ ವಿಜ್ಞಾನ ಹಾಗೂ ವಿಚಾರವಾದ, ಯಂತ್ರಯುಗ, ಸಾರಿಗೆ ಸುಧಾರಣೆ ಇವುಗಳೆಲ್ಲದರಿಂದ ಆದ ನವೋದಯ ( 'ರಿನೇಸಾನ್ಸ್' ) ಭಾರತೀಯ ಸಮಾಜದಲ್ಲಿ ಕ್ರಾಂತಿಕಾರಕ ಪರಿವರ್ತನೆಗಳನ್ನು ತಂದಿತು. ಮಧ್ಯಮವರ್ಗವು ಸಮಾಜದ ಮುಂದಾಳುತ್ವ ವಹಿಸಲು ಕಾರಣವಾಯಿತು. ಇಡೀ ಭಾರತದಲ್ಲಿ ಆದ ಈ ಪರಿವರ್ತನೆಗಳಿಂದ ಕರ್ನಾಟಕವೂ ಮುಕ್ತವಾಗಿರಲಿಲ್ಲ. ಇಂಥ ಪರಿವರ್ತನೆಗಳೇ ವಿವಿಧ ಮಾರ್ಗಗಳಿಂದ, ಮೂಲಗಳಿಂದ ಕರ್ನಾಟಕಕ್ಕೆ ಬಂದವು. ಈ ಪೈಕಿ ಕ್ರೈಸ್ತ ಮತ ಪ್ರಸಾರಕರು ಉಲ್ಲೇಖನೀಯರು. ಕರ್ನಾಟಕದಲ್ಲಿನ ಈ ಬದಲಾವಣೆಗಳಿಗೆ ಕಾರಣಕರ್ತರಾದ ಕ್ರೈಸ್ತ ಮತ ಪ್ರಸಾರಕರಲ್ಲಿ ಬಾಸೆಲ್ ಮಿಶನ್ ಅಗ್ರಗಣ್ಯವಾದುದು. ೧೮೩೪ ರ ಅಕ್ಟೋಬರ್ ೩೦ಕ್ಕೆ ಮಂಗಳೂರಿಗೆ ಬಂದು ಕಾರ್ಯಾರಂಭ ಮಾಡಿದ ಬಾಸೆಲ್ ಮಿಶನ್‌ಗೆ ಈಗ ಒಂದೂವರೆ ಶತಮಾನ ಮೀರಿತು.

ಸ್ವಿಜರ್ಲ್ಯಾಂಡ್ ದೇಶದಲ್ಲಿನ, ಫ್ರಾನ್ಸ್ ಮತ್ತು ಜರ್ಮನಿಗಳ ಗಡಿಯಲ್ಲಿರುವ ಜರ್ಮನ್ ಭಾಷಿಕ ಊರು ಬಾಸೆಲ್. ರ್‍ಹಾಯಿನ್ ನದಿದಂಡೆಯಲ್ಲಿರುವ ಒಂದು ಸ್ವಿಸ್ ಕ್ಯಾಂಟನ್‌ನ ಕೇಂದ್ರವಾಗಿರುವ ವಾಣಿಜ್ಯ, ಕೈಗಾರಿಕೆ ಹಾಗೂ ಶೈಕ್ಷಣಿಕ ಕೇಂದ್ರವಾದ ಈ ಪಟ್ಟಣವು ನೆಪೋಲಿಯನ್‌ನ ಯುದ್ಧಗಳ ಕಾಲದಲ್ಲಿ ಆಕ್ರಮಣದ ಭೀತಿಗೆ ಸತತವಾಗಿ ಒಳಗಾಗಿತ್ತು. ೧೮೧೫ರಲ್ಲಿ ರಷ್ಯಾದ ಸೈನ್ಯವು ಫ್ರಾನ್ಸ್ ವಿರುದ್ಧ ಯುದ್ಧ ನಡೆಸಲು ಬಾಸೆಲ್ ಮುಖಾಂತರವೇ ಹಾದುಹೋಗಿತ್ತು. ತಮ್ಮ ಊರು ಯಾವುದೇ ತೊಂದರೆಗೆ ಒಳಗಾಗದೆ ಸಾಬೀತಾಗಿ ಉಳಿಯುವಂತಾದರೆ, ತಾವೆಲ್ಲರೂ ಒಂದು ಕ್ರೈಸ್ತ ಧರ್ಮೋಪದೇಶಕರ ಶಾಲೆ ತೆರೆಯುವುದಾಗಿ ಊರ ಗಣ್ಯರು ಹರಕೆ ಹೊತ್ತರು. ನೆಪೋಲಿಯನ್ನನ ಪತನವಾಗಿ ಯೂರೋಪ್ ಅಪಾಯ ಮುಕ್ತವಾದಾಗ ಜರ್ಮನ್ ಇವ್ಯಾಂಜಲಿಕಲ್ ಸೊಸೈಟಿಯನ್ನು ಅವರು ೧೮೧೬ರ ಆಗಸ್ಟ್ ೧೬ರಂದು ಸ್ಥಾಪಿಸಿದರು, ಎಂಬುದಾಗಿ ೧೮೫೭ರಲ್ಲಿ ಪ್ರಕಟವಾದ 'ಬಾಸೆಲ್ ಮಿಶನ್ ರಿಪೋರ್ಟ್' ತಿಳಿಸುತ್ತದೆ. ಈ ಸಂಸ್ಥೆಯು ಮುಂದೆ 'ಬಾಸೆಲ್ ಇವ್ಯಾಂಜಲಿಕಲ್ ಸೊಸೈಟಿ' ಎಂದು ಪುನರ್ನಾಮಕರಣ ಹೊಂದಿತು. ಆರಂಭದಲ್ಲಿ ಆಫ್ರಿಕಾ ಖಂಡಕ್ಕೆ ಮಾತ್ರ ಮತಪ್ರಸಾರಕರನ್ನು ಕಳುಹಿಸುತ್ತಿದ್ದರೂ ೧೮೩೩ರ ಚಾರ್ಟರ್ ಆ್ಯಕ್ಟ್ (ಈಸ್ಟ್ ಇಂಡಿಯಾ ಕಂಪನಿಯು ಭಾರತದಲ್ಲಿ ವ್ಯವಹಾರ ನಡೆಸುವ ಹಕ್ಕನ್ನು ನವೀಕರಿಸುವ ಕಾಯಿದೆ) ಪ್ರಕಾರ, ಭಾರತದಲ್ಲಿ ಕ್ರೈಸ್ತ ಮಿಶನರಿಗಳು ಪ್ರಚಾರ ನಡೆಸುವ ಬಗ್ಗೆ ಇದ್ದ ಪ್ರತಿಬಂಧವನ್ನು ತೆಗೆದು ಹಾಕಿದಾಗ, ಭಾರತದಲ್ಲೂ ಕಣ್ಣು ಹಾಯಿಸುವ ನಿರ್ಣಯವನ್ನು ಬಾಸೆಲ್ ಮಿಶನ್ ಕೈಕೊಂಡು, ೧೮೩೪ರಲ್ಲಿ ಜಾನ್ ಕ್ರಿಸ್ಟೋಫ್ ಲೆಹ್ನರ್, ಕ್ರಿಸ್ಟೋಫ್ ಲಿಯೊನಾರ್ಡ್ ಗ್ರೆನರ್ ಮತ್ತು ಸ್ಯಾಮುವೆಲ್ ಹೆಬಿಕ್ ಎಂಬ ಮೂವರು ಕಲ್ಲಿಕೋಟೆ ಬಂದರಿನ ಮೂಲಕ ಬಂದು ಮಂಗಳೂರನ್ನು ತಲುಪಿ ಕಾರ್ಯಾರಂಭ ಮಾಡಿದರು.

ಬಾಸೆಲ್ ಮಿಶನ್‌ನವರು ಪ್ರಾಟೆಸ್ಟಂಟ್ ಪಂಥದವರು. ರೋಮನ್ ಕ್ಯಾಥಲಿಕರಂತೆ ಮತಾಂತರಿತ ಜನರ ಪೂರ್ತಿ ಹೆಸರು, ಭಾಷೆ, ಜೀವನ ವಿಧಾನಗಳಲ್ಲಿ ಒಮ್ಮೆಗೇ ಬದಲಾವಣೆ ಮಾಡಲು ಯತ್ನಿಸಿದವರಲ್ಲ. ಜೊತೆಗೆ ನವ ಶಿಕ್ಷಣ, ಭಾರತದ ಸಂಸ್ಕೃತಿ, ಸಾಹಿತ್ಯಗಳ ಅಧ್ಯಯನ ಹಾಗೂ ಮುದ್ರಣ, ಕೈಗಾರಿಕೆಗಳ ಬೆಳವಣಿಗೆಯ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳನ್ನು ತಂದವರು. ಕರ್ನಾಟಕದ ಕ್ರೈಸ್ತರಲ್ಲಿ ಕ್ಯಾಥಲಿಕರು ಬಹು ಸಂಖ್ಯಾತರು. ಪ್ರಾಟೆಸ್ಟೆಂಟರು ತೀರ ಅಲ್ಪ ಸಂಖ್ಯಾತರು. ಅವರಲ್ಲಿ ಬಾಸೆಲ್ ಮಿಶನ್, ಲಂಡನ್ ಮಿಷನ್ ಹಾಗೂ ವೆಸ್ಲಿಯನ್ ಮಿಶನ್ ಎಂಬ ಮೂರು ಮುಖ್ಯ ಗುಂಪುಗಳಿವೆ. (ಈ ಎಲ್ಲ ಪ್ರಾಟೆಸ್ಟೆಂಟರು ಈಗ 'ಚರ್ಚ್ ಆಫ್ ಸೌತ್ ಇಂಡಿಯಾ' ಎಂಬ ಸಾಮಾನ್ಯ ಸಂಸ್ಥೆಯಲ್ಲಿ ಒಂದಾಗಿದ್ದಾರೆ). ಆದರೆ ಈ ಪೈಕಿ ಬಾಸೆಲ್ ಮಿಶನ್ ಮಾತ್ರ ತನ್ನದೇ ಕೊಡುಗೆ ನೀಡಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಅದ್ವಿತೀಯ ಸ್ಥಾನ ಪಡೆಯಿತು. ದಕ್ಷಿಣ ಕನ್ನಡ, ಕೊಡಗು, ಧಾರವಾಡ ಹಾಗೂ ವಿಜಾಪುರ ಜಿಲ್ಲೆಗಳಲ್ಲಷ್ಟೇ ಅವರ ಚಟುವಟಿಕೆ ಸೀಮಿತವಾಗಿದ್ದರೂ ಅವರ ಚಟುವಟಿಕೆಗಳ ಪ್ರಭಾವ ವ್ಯಾಪಕ ಮತ್ತು ದೂರಗಾಮಿಯಾದ್ದು.

ಮತ ಪ್ರಚಾರಕ್ಕಾಗಿಯೇ ಬಂದವರು ಎಳೆಯರನ್ನು ಸೆಳೆಯಲು ಶಿಕ್ಷಣ ಕ್ಷೇತ್ರ ಪ್ರವೇಶಿಸಿ ಪಾಶ್ಚಾತ್ಯ ನವ ವಿಚಾರಗಳ ಗಾಳಿಯನ್ನು ತಂದರು. ಇಲ್ಲಿಯ ಜನರ ಭಾಷೆ ಕಲಿಯಲೆಂದು, ಜನಜೀವನ ಅರಿಯಲೆಂದು ಕನ್ನಡದ ವ್ಯಾಕರಣ, ಶಬ್ದಕೋಶಗಳ ವೈಜ್ಞಾನಿಕ ರಚನೆ ಆರಂಭ ಮಾಡಿದರು. ತಾವು ಟೀಕಿಸಬೇಕಾಗಿದ್ದ ಇಲ್ಲಿನ ಧರ್ಮ, ಸಂಸ್ಕೃತಿಗಳನ್ನು ಚನ್ನಾಗಿ ಅರಿಯಲು ಅವುಗಳ ಅಧ್ಯಯನ ನಡೆಸಿ ಕನ್ನಡ ಪ್ರಾಚೀನ ಗ್ರಂಥಗಳ ಸಂಪಾದನೆ, ಪ್ರಕಟಣೆಗೆ ಮುಂದಾದರು. ಪ್ರಕಟಣೆಗಾಗಿ ಮುದ್ರಣವನ್ನು ಜಾರಿಗೆ ತರಲು ಯತ್ನಿಸಿ ಕನ್ನಡ ಮುದ್ರಣದ ಕ್ಷೇತ್ರಕ್ಕೆ ಅದ್ವಿತೀಯ ಕೊಡುಗೆ ನೀಡಿದರು. ಕನ್ನಡದ ಜೊತೆಗೆ ಬಾಸೆಲ್ ಮಿಶನ್‌ನವರು ತುಳು, ಕೊಡವ ಭಾಷೆಗಳ ಅಧ್ಯಯನಕ್ಕೂ ಆರಂಭಿಸಿದರು. ಅಲ್ಲದೆ ಮತಾಂತರಿತ ದಲಿತರ ಉದರ ನಿರ್ವಾಹದ ಸಮಸ್ಯೆ ಪರಿಹರಿಸಲು ನೇಯ್ಗೆ, ಹೆಂಚಿನ ಕೈಗಾರಿಕೆಗಳಂಥ ನವ ಕೈಗಾರಿಕಾ ಕ್ಷೇತ್ರಗಳಲ್ಲಿ ಕಾಲಿಟ್ಟು ಆರ್ಥಿಕ ಕ್ಷೇತ್ರದಲ್ಲೂ ತಮ್ಮದೇ ಕೊಡುಗೆ ನೀಡಿದರು.

ಶಾಲೆಗಳನ್ನು ಆರಂಭಿಸಿ, ಅಲ್ಲಿ ಮಕ್ಕಳಿಗೆ ಬೈಬಲ್ ಶಿಕ್ಷಣ ನೀಡಿದಲ್ಲಿ, ಅವರನ್ನು ತಮ್ಮ ಧರ್ಮದ ಕಡೆ ಸೆಳೆಯುವುದು ಸುಲಭವೆಂದು ಈ ಮಿಶನರಿಗಳ ನಂಬಿಕೆ. "ಇಲ್ಲಿಯ ಜನತೆಯ ಮೂಢನಂಬಿಕೆಗಳನ್ನೂ ಸ್ವಧರ್ಮದಲ್ಲಿಯ 'ಅಂಧ' ನಿಷ್ಠೆಯನ್ನೂ ಸಡಲಿಸಿ ಕ್ರೈಸ್ತ ಧರ್ಮದಲ್ಲಿ ಆಸ್ಥೆಯನ್ನು ಕುದುರಿಸುವುದಕ್ಕೆ ಪ್ರಥಮ ಸೋಪಾನವೆಂದರೆ ಪಾಶ್ಚಾತ್ಯ ಶಿಕ್ಷಣ ಕ್ರಮವೇ – ಎಂದು ಅವರು ನಂಬಿದ್ದರು" ಎಂದು ಈ ಬಗ್ಗೆ ಡಾ॥ ಶ್ರೀನಿವಾಸ ಹಾವನೂರ ಹೇಳಿದ್ದಾರೆ. ಹೆಬಿಕ್ ೧೮೩೬ರಲ್ಲಿ ಮಂಗಳೂರಲ್ಲಿ ನಾಲ್ಕು ಬಾಲಕರನ್ನು ಒಳಗೊಂಡು ಒಂದು ಶಾಲೆ ಆರಂಭಿಸಿದ. ಮುಂದೆ ೧೮೪೦ರಲ್ಲಿ ಅದು ಇಂಗ್ಲಿಷ್ ಶಾಲೆಯಾಯಿತು. ಅದೇ ರೀತಿ ಮೋಗ್ಲಿಂಗ್ ೧೮೩೭ರಲ್ಲಿ ಧಾರವಾಡದಲ್ಲೂ ಶಾಲೆ ಆರಂಭಿಸಿದ. ೧೮೫೯ರಲ್ಲಿ ಹುಬ್ಬಳ್ಳಿ, ೧೮೪೧ರಲ್ಲಿ ಗದಗು, ಮಲ್ಲಸಂದ್ರ, ಗುಳೇದಗುಡ್ಡಗಳಲ್ಲೂ ಶಾಲೆಗಳು ಆರಂಭವಾದುವು. ಕೊಡಗಿನ ೧೮೩೪ರಲ್ಲಿ ಆರಂಭವಾದ ಆ್ಯಂಗ್ಲೊ ವರ್ನಾಕ್ಯುಲರ್ ಶಾಲೆಯನ್ನು ಹಾಗೂ ಇತರೆಡೆ ಕೆಲವು ಕನ್ನಡ ಪ್ರಾಥಮಿಕ ಶಾಲೆಗಳನ್ನೂ ಬ್ರಿಟಿಷ್ ಸರಕಾರವು ಪ್ರಾರಂಭಿಸಿದ್ದರೂ ಈ ಶಾಲೆಗಳಲ್ಲಿ "ಕೊಡವರಿಗೆ ಏನನ್ನೂ ಕಲಿಸಿಲ್ಲ, ಅವರು ಏನನ್ನೂ ಕಲಿತಿಲ್ಲ" ಎಂದು ಅಲ್ಲಿನ ಶಿಕ್ಷಣದ ಕೆಳಮಟ್ಟದ ಬಗ್ಗೆ ಮೋಗ್ಲಿಂಗ್ ೧೮೫೪ರಲ್ಲಿ ಬರೆಯಲು, ೧೮೫೫ರಲ್ಲಿ ಮಡಿಕೇರಿಯಲ್ಲಿ ಒಂದು ಲೋವರ್ ಸೆಕೆಂಡರಿ ಶಾಲೆಯನ್ನು ತೆರೆಯಲು ಮೋಗ್ಲಿಂಗನಿಗೆ ಕೊಡಗಿನ ಕಮೀಷನರ್ ಆಗಿದ್ದ ಸರ್ ಮಾರ್ಕ್ ಕಬ್ಬನ್ ಅನುಮತಿ ನೀಡಿದನು. ಕೊಡಗಿನ ಪ್ರಥಮ ಗ್ಯಾಸೆಟಿಯರ್ ಬರೆದ ರಿಕ್ಟರ್ ಮುಂದೆ ಅಲ್ಲಿ ಅಧ್ಯಾಪಕನಾದನು.

"ಬಾಸೆಲ್ ಮಿಶನ್‌ನವರ ವಿದ್ಯಾ ಕ್ಷೇತ್ರದಲ್ಲಿಯ ಪ್ರಗತಿ ಬೆರಗುಗೊಳಿಸುವಂತಿದೆ. ಕ್ರಿ.ಶ. ೧೮೫೫ರ ಸುಮಾರಿಗೆ ಅವರು ೫೦ ಪ್ರಾಥಮಿಕ ಶಾಲೆಗಳನ್ನೂ ೮ ಹೈಸ್ಕೂಲುಗಳನ್ನೂ ನಡೆಸುತ್ತಿದ್ದರು. ಶಾಲೆಗಳಲ್ಲಿ ಶಿಸ್ತನ್ನು ಚೆನ್ನಾಗಿ ಕಾಯ್ದುಕೊಳ್ಳಲಾಗುತ್ತಿತ್ತು" ಎಂದು ಡಾ॥ ಶ್ರೀನಿವಾಸ ಹಾವನೂರರು ಹೇಳಿರುವರಲ್ಲದೆ

ಔದ್ಯೋಗಿಕ ಶಿಕ್ಷಣ, ಸ್ತ್ರೀಯರ ಶಿಕ್ಷಣಗಳ ಬಗೆಗೂ ಅವರು ಮನಸ್ಸು ಕೊಟ್ಟರೆಂಬ ಸಂಗತಿಯ ಕಡೆ ಗಮನ ಸೆಳೆದಿದ್ದಾರೆ.

ಮಂಗಳೂರನ್ನೇ ಕೇಂದ್ರವಾಗಿಟ್ಟುಕೊಂಡು ಇವರು ನಡೆಸಿದ ಚಟುವಟಿಕೆಗಳಲ್ಲಿ ಈಗಿನ ಬಲ್ಮಠ ('ಬೆಲ್ಮೊಂಟ್' ಎಂಬ ಹೆಸರಿನ ಒಂದು ಬಂಗಲೆಯಿದ್ದ ಈ ಪ್ರದೇಶಕ್ಕೆ ಈ ಹೆಸರು ಬಂತು) ಕಟ್ಟಿದ್ದ ಶಾಂತಿ ಇಗರ್ಜಿ (೧೮೬೨) ಬಾಸೆಲ್‌ನಲ್ಲಿದ್ದ ಮಿಶನ್ ಹೌಸ್‌ನ ಮಾದರಿಯಲ್ಲೇ ಕಟ್ಟಲ್ಪಟ್ಟಿತು. ೧೯೬೨ರಲ್ಲಿ ಅದರ ಜೀರ್ಣೋದ್ಧಾರ ವಾದರೂ ಮೂಲವಸ್ತುವಿನಲ್ಲಿ ಹೆಚ್ಚಿನ ಬದಲಾವಣೆ ಆಗಲಿಲ್ಲ. ಮುಂದೆ ಮಂಗಳೂರ ಜೆಪ್ಪುವಿನ ಶಾಂತಿ ಇಗರ್ಜಿ ಬೊಕ್ಕಪಟ್ಟಣದ ವಿಶ್ರಾಂತಿ ಇಗರ್ಜಿಗಳ ರಚನೆ ಯಾಯಿತಲ್ಲದೇ ಧಾರವಾಡ, ಹುಬ್ಬಳ್ಳಿ (ಉಣಕಲ್), ಗದಗು, ಗುಳೇದಗುಡ್ಡಗಳಲ್ಲೂ ಅವರು ಇಗರ್ಜಿಗಳನ್ನು ಕಟ್ಟಿದರು. ಮಂಗಳೂರಲ್ಲಿ ಮತಾಂತರಗೊಂಡವರಲ್ಲಿ ೧೮೪೨ರ ಆನಂದರಾವ್ ಕೌಂಡಿಣ್ಯ ಎಂಬ ಬ್ರಾಹ್ಮಣ ಮುಖ್ಯನು. ಭಗವಂತರಾವ್ ಕೌಶಿಕ್ ಮತ್ತು ಮುಕುಂದ ರಾವ್ ಕೌಶಿಕ್ ಎಂಬ ಇಬ್ಬರು ಸಾರಸ್ವತರೂ ಇದರ ಹಿಂದೆ ಮತಾಂತರ ಹೊಂದಿದರು. ಇದಕ್ಕೆ ಕಾರಣಕರ್ತರು ರೆ. ಮೋಗ್ಲಿಂಗ್. ೧೮೩೮ರಲ್ಲಿ ಮಂಗಳೂರಲ್ಲಿ ಸ್ಥಾಪಿಸಿದ ಉಪದೇಶಕರ ಶಾಲೆ(ಸೆಮಿನರಿ)ಯಲ್ಲಿ ಇವರಿಗೆ ಮುಂದೆ ತರಬೇತಿ ನೀಡಲಾಯಿತು. ಆನಂದರಾವ್ ಕೌಂಡಿಣ್ಯನು ಮುಂದೆ ಕೊಡಗಿಗೆ ಬಂದು ಮತ ಪ್ರಚಾರ ಕೈಕೊಂಡನು. ಇವರನ್ನುಳಿದು ದಕ್ಷಿಣಕನ್ನಡದಲ್ಲಿ ಮತಾಂತರಿತರಾದ ಜನರಲ್ಲಿ ಅಸ್ಪೃಶ್ಯರಾದ 'ಹೊಲೆಯ'ರೂ ಹಾಗೂ ಆಗ ಅಸ್ಪೃಶ್ಯರೆಂದು ಪರಿಗಣಿಸಲ್ಪಡುತ್ತಿದ್ದ ಬಿಲ್ಲವರೂ ಮುಖ್ಯರು.

ಮತಾಂತರಿತರಾದ ಜನ ವಿವಿಧ ರೀತಿಯ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುತ್ತಿದ್ದುದರಿಂದ ಅವರು ಸ್ವತಂತ್ರವಾಗಿ ಜೀವನ ನಡೆಸಲು ಸಾಧ್ಯವಾಗುವಂತೆ ರೆವೆರೆಂಡ್ ಮೆಟ್ಜ್ ಎಂಬ ಜರ್ಮನ್ ಪಾದ್ರಿ ನೇಯ್ಗೆಯಲ್ಲಿ ಅನೇಕ ನವ ಕ್ರೈಸ್ತರಿಗೆ ತರಬೇತಿಯನ್ನು ನೀಡಲು ೧೮೪೪ ರಿಂದ ಆರಂಭಿಸಿದನು. ಹ್ಯಾಲ್ಲೆನ್ ಎಂಬಾತನು ಓಡುಲಾಳಿ ('ಫ್ಲಾಯಿಂಗ್ ಪಟ್ಲ್') ಇರುವ ಚೌಕಟ್ಟಿನಲ್ಲಿ ಮಗ್ಗ ('ಫ್ರೇಂ ಲೂಂ') ಅನ್ನು ತುಳಿಯ ಮಗ್ಗದ ('ಪಿಟ್ ಲೂಂ') ಬದಲಿಗೆ ೧೮೫೧ರಲ್ಲಿ ರೂಢಿಗೆ ತಂದನು. ವಿಶಿಷ್ಟ ರೀತಿಯ (ಮುಂದೆ ವಿವಿಧ ರೀತಿಯ ಸಮವಸ್ತ್ರಗಳಿಗೆ ಬಳಕೆಯಾದ) ಖಾಕಿ ವಸ್ತ್ರದ ನೇಯ್ಗೆ ಯನ್ನು ಆರಂಭಿಸಿದವರೇ ಬಾಸೆಲ್ ಮಿಶನವರು. ಆರ್ಥಿಕ ಕ್ಷೇತ್ರದಲ್ಲಿ ಬಾಸೆಲ್ ಮಿಶನ್ ಆರಂಭಿಸಿದ ಇನ್ನೊಂದು ಗಣ್ಯ ಆವಿಷ್ಕಾರವೆಂದರೆ ಹೆಂಚಿನ ಉದ್ದಿಮೆ. ಜಗತ್ತಿನಲ್ಲೆಲ್ಲ ಖ್ಯಾತವಾದ ಮಂಗಳೂರು ಹೆಂಚಿನ ಉದ್ದಿಮೆಗೆ ಚಾಲನೆ ನೀಡಿದವರು ಅವರು. ಅವರೆಗೆ ಕುಂಬಾರರು (ಒಡಾರಿ) ಕೈಯಿಂದ (ತಿಗರಿಯಲ್ಲಿ) ತಯಾರಾಗುತ್ತಿದ್ದ ಪೊಳ್ಳು ಕಂಬಗಳನ್ನು ಸೀಳಿ ಮಾಡುತ್ತಿದ್ದ ನಾಡ ಓಡು (ಹೆಂಚು)ಗಳ ಬದಲಿಗೆ ಹೊಸ ಯಂತ್ರೋತ್ಪಾದಿತ ಹೆಂಚು ತಯಾರಿಸಲು ಕಾರಣನು ಪ್ಲೆಬಾತ್ ಎಂಬ ಜರ್ಮನ್ ಪಾದ್ರಿ. ಆತ ೧೮೬೫ರಲ್ಲಿ ಆರಂಭಿಸಿದ ಬಾಸೆಲ್ ಮಿಶನ್ ಹೆಂಚಿನ ಕಾರ್ಖಾನೆ ಆರಂಭದಲ್ಲಿ ೧೨ ಜನ ಕೂಲಿಗಳನ್ನು ಕೆಲಸಕ್ಕಿಟ್ಟುಕೊಂಡು ದಿನಕ್ಕೆ ೫೬೦ ಹೆಂಚುಗಳನ್ನು ತಯಾರಿಸುತ್ತಿತ್ತು. ಮಂಗಳೂರು ಹೆಂಚು ಆಫ್ರಿಕಾ, ಯೂರೋಪ್‌ಗಳಿಗೂ ರಫ್ತಾಗುತ್ತಿತ್ತು. (೧೯೬೨ರ ಸುಮಾರಿಗೆ ಮಂಗಳೂರಿನಲ್ಲಿ ೪೩ ಕಾರ್ಖಾನೆಗಳಾಗಿ ಹಲವು ಸಾವಿರ ಜನ ಅಲ್ಲಿ ದುಡಿಯುತ್ತಿದ್ದರು).

ಕನ್ನಡ ಮುದ್ರಣ ಕ್ಷೇತ್ರದಲ್ಲಿ ಬಾಸೆಲ್ ಮಿಶನ್ ನಡೆಸಿದ ಸಾಧನೆ ಅದ್ವಿತೀಯ. ೧೮೧೭ರಲ್ಲೇ ಕಲ್ಕತ್ತಾ ಬಳಿಯ ಶ್ರೀರಾಮಪುರದ ಡೇನಿಶ್ ವಸಾಹತಿನಿಂದ 'ಎ ಗ್ರಾಮರ್ ಆಫ್ ದಿ ಕರ್ನಾಟಾ ಲ್ಯಾಂಗ್ವೇಜ್' ಎಂಬ ಪ್ರಥಮ ಕನ್ನಡಾಕ್ಷರವಿದ್ದ ಕೃತಿ ಪ್ರಕಟವಾಗಿದ್ದರೂ ಬಾಸೆಲ್ ಮಿಶನ್‌ನವರು ಮುದ್ರಣದಲ್ಲಿ ನಡೆಸಿದ ಹಲವಾರು ಪ್ರಯೋಗಗಳ ಫಲವಾಗಿ ಚಲ ಅಚ್ಚುಗಳ ಸುಂದರ ಮಂಗಳೂರು ಲಿಪಿಯು ರೂಪು ತಳೆಯಿತು. ಕನ್ನಡ ಕಲಿಯಲು ನಿಘಂಟು, ವ್ಯಾಕರಣ, ಕನ್ನಡ ಸಾಹಿತ್ಯ ಹಾಗೂ ಧಾರ್ಮಿಕ ಗ್ರಂಥಗಳು ಹಾಗೂ ಸ್ವಮತ ಪ್ರಚಾರ ಮಾಡುವ ಬೈಬಲ್ ಮುಂತಾದ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಲು ಕ್ರೈಸ್ತ ಮತ ಪ್ರಸಾರಕರ ವಿವಿಧ ಪಂಥಗಳ ಯತ್ನ ನಡೆದೇ ಇತ್ತು. ಮದ್ರಾಸಿನ ಕಾಲೇಜ್ ಪ್ರೆಸ್ ನಿಂದ 'ಎ ಗ್ರಾಮರ್ ಆಫ್ ದಿ ಕರ್ನಾಟಕಾ ಲ್ಯಾಂಗ್ವೇಜ್' ಮ್ಯಾಕರೆಲ್ ಎಂಬ ಪಾದ್ರಿಯ ಪ್ರಯತ್ನದಿಂದ ೧೮೨೦ ರಲ್ಲಿ ಹೊರಬಂದಿತ್ತು. ರೆವೆರೆಂಡ್ ರೀವ್ ಅವರ ಯತ್ನದಿಂದ ೧೮೩೨ರಲ್ಲಿ ಇಂಗ್ಲಿಷ್ ಕನ್ನಡ ಶಬ್ದಕೋಶ

ಹೊರಬಂದಿತ್ತು. ಲಂಡನ್ ಮಿಷನ್‌ನ ಜಾನ್ ಹ್ಯಾಂಡ್ಸ್‌ನ ಪ್ರಯತ್ನದಿಂದ ಮೊದಲಬಾರಿ ಕೇವಲ ಕನ್ನಡ ಲಿಪಿಗಳು ಮಾತ್ರವಿದ್ದ ಕನ್ನಡ ಬೈಬಲ್‌ಅನ್ನು ೧೮೨೦ರಲ್ಲಿ ಮದ್ರಾಸಿನ ಕಮರ್ಷಿಯಲ್ ಪ್ರೆಸ್‌ನಲ್ಲಿ ಮುದ್ರಿಸಿದ್ದನು. ಇದರ ಲಿಪಿ ಇಂದಿನ ತೆಲುಗು ಲಿಪಿಯನ್ನೇ ಹೋಲುತ್ತಿತ್ತು. ಇದೇ ರೀತಿ ಗ್ಯಾರೆಟ್ ಎಂಬ ವೆಸ್ಲಿಯನ್ ಮಿಶನರಿಯ ಯತ್ನದಿಂದ ೧೮೪೦ರಿಂದ ಸರಕಾರೀ ಮುದ್ರಣಾಲಯ ಬೆಂಗಳೂರಿನಲ್ಲಿ ಆರಂಭ ಆಗಿದ್ದರೂ ೧೮೪೧ರಲ್ಲಿ ವೈಗಲ್ ಮತ್ತು ಪ್ಲೆಬ್ಸ್ಟ್ ಎಂಬವರು ಯತ್ನಿಸಿ ಆರಂಭಿಸಿದ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ ಉಲ್ಲೇಖನೀಯವಾದುದು. ಕನ್ನಡ ಮುದ್ರಣ ವಿಚಾರದಲ್ಲಿ ಮಂಗಳೂರು ಬಾಸೆಲ್ ಮಿಶನ್ನಿನ ಹೆಸರು ಅಜರಾಮರವಾದುದು ಎಂದು ಹೇಳಿರುವ ಡಾ॥ ಶ್ರೀನಿವಾಸ ಹಾವನೂರರು ೧೮೪೧ರಲ್ಲಿ ಆರಂಭಿಸಿದ 'ಜರ್ಮನ್ ಇವ್ಯಾಂಜಲಿಕಲ್ ಮಿಶನ್ ಪ್ರೆಸ್' ನಲ್ಲಿ 'ತುಳು ಕೀರ್ತನೆಗಳು' ಎಂಬ ಪುಸ್ತಕವನ್ನು ಕನ್ನಡ ಲಿಪಿಯಲ್ಲಿ ಮೊದಲ ಬಾರಿಗೆ ಮುದ್ರಿಸಿದರೆಂದು ಹೇಳಿದ್ದಾರೆ. ಕನ್ನಡ ಲಿಪಿಯ ಸುಧಾರಣೆಗಾಗಿ ಅನೇಕ ಪ್ರಯತ್ನಗಳನ್ನು ಮಾಡಿದರು. ಮತ್ತು ಅತ್ಯಂತ ಸುಂದರವಾದ ಕನ್ನಡ ಮುದ್ರಣಕ್ಕೆ ಕಾರಣರಾದರು. ೧೮೪೩ರಲ್ಲಿ ಅವರು ಆರಂಭಿಸಿದ ಮೊದಲ ಕನ್ನಡ ಪತ್ರಿಕೆ 'ಮಂಗಳೂರ ಸಮಾಚಾರ' ಹಾಗೂ 'ಹಿಂದೂಧರ್ಮಶಾಸ್ತ್ರದ ಪುಸ್ತಕವು' (೧೮೫೭) ಕೈಬರಹದಿಂದ ಕಲ್ಲಚ್ಚಿನಲ್ಲಿ ('ಲಿಥೋಗ್ರಾಫ್') ಮುದ್ರಣವಾದರೆ ಚಲ ಅಚ್ಚುಗಳಲ್ಲಿ ಮುದ್ರಿತವಾದ 'ರಾಜೇಂದ್ರನಾಮೆ' (೧೮೫೭) ಹಾಗೂ 'ಭೂತಾಳ ಪಾಂಡ್ಯ' ಬಿ. ಎಂ.ಶ್ರೀ. ಯೋಜಿಸಿದ್ದ ಅಕ್ಷರ ಸುಧಾರಣಾ ಕಲ್ಪನೆಯನ್ನು ಹೋಲುವ ಲಿಪಿಗಳಲ್ಲಿ ಆಗ ಮುದ್ರಿತವಾಗಿತ್ತು. "ಇಲ್ಲಿ ಮುದ್ರಿತವಾದ ಕೃತಿಗಳ ವೈವಿಧ್ಯವು ವಿಸ್ಮಯಜನಕವಾಗಿದೆ; ಹಲವಾರು ಅಂಶಗಳಲ್ಲಿ ಹೊಸಕ್ರಮಗಳನ್ನು ರೂಢಿಸಿದೆ. ಪಠ್ಯಪುಸ್ತಕ ಹಾಗೂ ಕ್ರೈಸ್ತಧರ್ಮದ ಪುಸ್ತಕಗಳಂತೂ ಸರಿಯೇ. ಅನೇಕ ವ್ಯಾವಹಾರಿಕ ಪುಸ್ತಕಗಳೂ ಪ್ರಥಮತಃ ಇಲ್ಲಿ ಅಚ್ಚಾದವು. ಕರಪತ್ರ, ಪಂಚಾಂಗ, ರೈಲ್ವೇ ವೇಳಾಪತ್ರಿಕೆ, ಕೋಷ್ಟಕ-ಇವುಗಳು ಇಲ್ಲಿಂದಲೇ ಹೊರಬಂದವು" ಎಂಬ ಡಾ॥ ಶ್ರೀನಿವಾಸ ಹಾವನೂರರ ಮಾತು ಇಲ್ಲಿ ಉಲ್ಲೇಖನೀಯ. ವರ್ಣಮಯ ಮುದ್ರಣವನ್ನೂ ರೂಢಿಗೆ ತಂದು ಭಾರತದ ನಕಾಶೆಯನ್ನೂ ೧೮೫೫ರಲ್ಲಿ ಅಲ್ಲಿಂದ ಹೊರತಂದರು. ೧೮೪೩ರಿಂದ ಕೊಂಕಣಿ ಭಾಷಾಗ್ರಂಥಗಳನ್ನೂ ಇಲ್ಲಿಂದ ಕನ್ನಡ ಲಿಪಿಯಲ್ಲಿ ಮುದ್ರಿಸಿದರು. ಬಾಸೆಲ್ ಮಿಶನ್‌ನವರೂ ಅವರನ್ನು ಅನುಸರಿಸಿ ಇತರರೂ ಮಂಗಳೂರಿನಲ್ಲಿ ನಡೆಸಿದ ವಿವಿಧ ಪ್ರಯೋಗಗಳ ಫಲವಾಗಿ ಅತ್ತಾವರ ಅನಂತಾಚಾರಿ ಮುಂದೆ ರೂಪಿಸಿದ ಸುಂದರ ಕನ್ನಡ ಅಚ್ಚುಮೊಳೆಗಳ ('ಅನಂತ ಲೇಡ್ಸ್') ಆವಿಷ್ಕಾರ ಸಾಧ್ಯವಾಯಿತು. ಮಂಗಳೂರು ಸುಂದರ ಕನ್ನಡ ಮುದ್ರಣದ ಅಗ್ರಗಣ್ಯ ಕೇಂದ್ರವಾಯಿತು.

ಆದರೆ ಬಾಸೆಲ್ ಮಿಶನ್‌ರವರು ಕರ್ನಾಟಕಕ್ಕೆ ಸಲ್ಲಿಸಿದ ಅದ್ವಿತೀಯ ಸೇವೆಯೆಂದರೆ, ಕನ್ನಡ ಭಾಷೆ, ಸಾಹಿತ್ಯಗಳ ಅಧ್ಯಯನಕ್ಕೆ ನೀಡಿದ ಚಾಲನೆ ಹಾಗೂ ಕೊಡುಗೆ. ತುಳು, ಕೊಡವ, ಕೊಂಕಣಿಗಳಿಗೆ ಸಂಬಂಧಿಸಿಯೂ ಅವರು ಕೆಲವೊಂದು ಆರಂಭಿಕ ಸಾಧನೆಗಳನ್ನು ಮಾಡಿದ್ದಾರೆಂಬುದೂ ಮರೆಯಲಾಗದ ಸಂಗತಿಗಳು. ಕನ್ನಡಕ್ಕೆ ಸಂಬಂಧಿಸಿದ ಉಲ್ಲೇಖಿಸಲೇಬೇಕಾದ ಅಗ್ರಗಣ್ಯ ವ್ಯಕ್ತಿಗಳೆಂದರೆ, ರೆವೆರೆಂಡ್ ತ್ಸಿಗ್ಲರ್, ರೆವೆರೆಂಡ್ ಮೋಗ್ಲಿಂಗ್, ಜಿ. ಹೆಚ್. ವೈಗಲ್ ಹಾಗೂ ರೆವೆರೆಂಡ್ ಕಿಟ್ಟೆಲ್.

ಫ್ರೆಡರಿಕ್ ತ್ಸಿಗ್ಲರ್ (೧೮೩೨-೧೯೦೬) ಬಾಸೆಲ್‌ನ ಉಪದೇಶಕರ ಶಾಲೆಯಲ್ಲಿ ಅಧ್ಯಾಪಕನಾಗಿ ಸೇರಿದ್ದರೂ ಮುಂದೆ ತಾನೇ ಉಪದೇಶಕ(ಮಿಶನರಿ)ನಾಗಿ ೧೮೬೨ ಮಂಗಳೂರಿಗೆ ಬಂದು ಅಲ್ಲಿಯ ಮಿಶನ್ ಹೈಸ್ಕೂಲಿನಲ್ಲೂ ೧೮೬೮ರಿಂದ ಹುಬ್ಬಳ್ಳಿಯಲ್ಲೂ ೧೮೭೮ರಲ್ಲಿ ಧಾರಾವಾಡದಲ್ಲೂ ಅಧ್ಯಾಪಕನಾಗಿ ದುಡಿದವನು. ಶಿಕ್ಷಣ ಕ್ಷೇತ್ರದಲ್ಲಿ ವಿಶೇಷತಃ ಗಣಿತ, ಭೂಗೋಲ, ಸಸ್ಯಶಾಸ್ತ್ರಗಳ ಕುರಿತು ಸ್ವತಃ ಅಧ್ಯಯನ, ಅಧ್ಯಾಪನಗಳಿಗೆ ಗಮನವಿತ್ತು ಶೈಕ್ಷಣಿಕ ಉನ್ನತಿಯ ಕಡೆಗೆ ಗಮನವಿತ್ತು, ಮತಪ್ರಸಾರದ ಚಟುವಟಿಕೆಯನ್ನು ಕಡೆಗಣಿಸುತ್ತಿರುವನೆಂಬ ಆಪಾದನೆಯನ್ನು ತನ್ನ ಮಿಶನರಿ ಸಂಸ್ಥೆಯಿಂದ ಆತ ಎದುರಿಸಬೇಕಾಯಿತು. ಕನ್ನಡ ಭಾಷೆಯನ್ನು ಆಳವಾಗಿ ಅಭ್ಯಸಿಸಿ, 'ಎ ಕ್ಯಾಟೆಚಿಸ್ಮ್ ಆಫ್ ಕನ್ನಡ ಗ್ರಾಮರ್' (೧೮೮೪), 'ಎ ಪ್ರಾಕ್ಟಿಕಲ್ ಕೀ ಟು ಕನ್ನಡ ಲ್ಯಾಂಗ್ವೇಜ್' (೧೮೮೮), ಹಾಗೂ 'ಇಂಗ್ಲಿಷ್ ಕನ್ನಡ ಕೋಶ' (೧೮೮೮) ಗಣ್ಯ ಕೃತಿಗಳನ್ನು ನೀಡಿದನು.

ಕೊನೆಯ ಕೃತಿ ನಾಲ್ಕು ಬಾರಿ ಪರಿಷ್ಕೃತ ಆವೃತ್ತಿಗಳನ್ನು ಮುಂದೆ ಕಂಡಿತು. ಅಲ್ಲದೆ ದಾಸರ ಕೃತಿಗಳನ್ನು ಅನುಸರಿಸಿ 'ಗೀತೆಗಳು' ಎಂಬ ಕನ್ನಡ ಭಜನೆಗಳನ್ನೂ ರಚಿಸಿ, ಅವುಗಳಿಗೆ ರಾಗಸಂಯೋಜಿಸಿ ಹಾಡುತ್ತಿದ್ದ. ಅವನ ಪತ್ನಿ ಜೂಲಿಯನ್ ಕೂಡ ಇಂಥ ಗೀತೆಗಳ ರಚನೆ, ಗಾಯನಗಳಿಗೆ ನೆರವಾಗಿದ್ದಾಳೆ. ಕನ್ನಡದ ಬಗ್ಗೆ ತ್ಸಿಗ್ಲರ್ ಎಷ್ಟೊಂದು ಕೆಲಸ ಮಾಡಿದ್ದಾನೆಂದರೆ, ೧೮೯೩-೯೪ರಲ್ಲಿ ಅವನು ಅಲ್ಲಿನ ಕರ್ನಾಟಕ ವಿದ್ಯಾವರ್ಧಕ ಸಂಘದ ಅಧ್ಯಕ್ಷನೂ ಆಗಿದ್ದ. (ಇತರ ಅನೇಕ ಮಿಶನರಿಗಳೂ ಕನ್ನಡದ ಮೊದಲ ಭಾವಗೀತೆಗಳನ್ನು ಆ ಕಾಲದಲ್ಲಿ ಬರೆದರು).

ಧಾರವಾಡ, ಮಂಗಳೂರು, ಕೊಡಗುಗಳಲ್ಲಿ ಕೆಲಸ ಮಾಡಿದ ಹರ್ಮನ್ ಮೋಗ್ಲಿಂಗ್ (೧೮೧೧-೧೮೮೧) ತೀಬಿಂಜೆನ್ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದು (೧೮೫೯), ೧೮೩೬ಕ್ಕೆ ಮಂಗಳೂರಿಗೆ ಬಂದು ಅದೇ ವರ್ಷ ಹೆಬಿಕ್‌ನ ಜೊತೆ ಧಾರವಾಡ ಸೇರಿ, ಅಲ್ಲಿಂದ ಮುಂದೆ ೧೮೩೮ರಲ್ಲಿ ಮಂಗಳೂರಿಗೆ ಮರಳಿದನು. 'ಮಂಗಳೂರ ಸಮಾಚಾರ' ಕನ್ನಡದ ಪ್ರಪ್ರಥಮ ಕನ್ನಡ ಪತ್ರಿಕೆಯನ್ನು ೧೮೪೩ರ ಜುಲೈ ೧ರಂದು ಪಾಕ್ಷಿಕವಾಗಿ ಮಂಗಳೂರಿನಿಂದ ಅವನು ಹೊರತಂದನು. ಮುಂದೆ ಆ ಪತ್ರಿಕೆ ನಿಲ್ಲಿಸಬೇಕಾಗಿ ಬಂದಾಗ, ಬಳ್ಳಾರಿಯಿಂದ ೧೮೪೪ರಲ್ಲಿ 'ಕನ್ನಡ ಸಮಾಚಾರ' ಆರಂಭಿಸಿದ್ದೂ ಈತನೇ. 'ಕನ್ನಡ ಸುವಾರ್ತಿಕೆ' (೧೮೫೭) ಕೂಡ ಈತನದೇ. ಹೀಗೆ ಮೋಗ್ಲಿಂಗ್ ಕನ್ನಡ ಪತ್ರಿಕೋದ್ಯಮದ ಪಿತಾಮಹ. 'ರಾಜೇಂದ್ರನಾಮೆ'ಯ ಪ್ರಕಟಣೆಯು ಈತನ ಇನ್ನೊಂದು ಸಾಧನೆ. ಕೊಡಗಿನಲ್ಲಿ ರೆವೆರೆಂಡ್ ಗುಂಡರ್ಟ್ ಮತ್ತು ಆನಂದರಾವ್ ಕೌಂಡಿಣ್ಯನ ನೆರವಿನಿಂದ ಈತನು ಕೊಡಗಿನ ಅರಮೇರಿ ಗ್ರಾಮದ ಅಳಮಂಡ ಸೋಮಯ್ಯ ಎಂಬಾತನನ್ನು ಮತಾಂತರಿಸಿದ್ದಲ್ಲದೆ (೧೮೫೩) ಅಳಮಂಡ ಜಮ್ಮದ ೧೫೦ ಅಸ್ಪೃಶ್ಯರನ್ನು ಮತಾಂತರಿಸಿದನು. 'ಕೂರ್ಗ್ ಮೆಮಾಯರ್ಸ್'(೧೮೫೫) ಈತನ ಉಲ್ಲೇಖನೀಯವಾದ ಕೊಡಗಿನ ಬಗೆಗಿನ ಆಕರಗ್ರಂಥ. 'ಬಿಬ್ಲಿಯೊಥೆಕಾ ಕರ್ನಾಟಿಕಾ' ಮಾಲಿಕೆಯಲ್ಲಿ ಜೈಮಿನಿ ಭಾರತ (೧೮೪೮), ತೊರೆವೆ ರಾಮಾಯಣದ ಆರು ಸಂಧಿಗಳು, ದಾಸರ ಪದಗಳು (೧೮೫೦), ಹರಿಭಕ್ತಿಸಾರ, ಕುಮಾರವ್ಯಾಸ ಭಾರತ, ಬಸವಪುರಾಣ, ಚನ್ನಬಸವಪುರಾಣ ಇತ್ಯಾದಿಗಳನ್ನು ಪ್ರಕಟಿಸಿದ್ದಲ್ಲದೆ, ಬನಿಯನ್‌ನ 'ಪಿಲ್‌ಗ್ರಿಮ್ಸ್ ಪ್ರೊಗ್ರೆಸ್' ಕೃತಿಯನ್ನು ವೈಗಲ್‌ನ ನೆರವಿನಿಂದ 'ಯಾತ್ರಿಕನ ಸಂಚಾರ' ಎಂದು ಪ್ರಕಟಿಸಿದ್ದಾನೆ (೧೮೪೭). ಕೆಂಪುನಾರಾಯಣನ 'ಮುದ್ರಾಮಂಜೂಷ'ದ ನಂತರ ಇದೇ ಕನ್ನಡದ ಕಾದಂಬರಿಯೆನ್ನಬಹುದು. 'ಜಾತಿ(ಮತ) ವಿಚಾರಣೆ' (೧೮೪೫) ಹಾಗೂ 'ದೇವ ವಿಚಾರಣೆ' (೧೮೫೨) ಎಂಬ ಮೋಗ್ಲಿಂಗನ ಕೃತಿಗಳನ್ನು "ಹೊಸಗನ್ನಡದ ಆದ್ಯ ಪ್ರಬಂಧಗಳಾಗಿವೆಯೆನ್ನಬಹುದು" ಎಂದು ಡಾ॥ ಶ್ರೀನಿವಾಸ ಹಾವನೂರ ಹೇಳಿದ್ದಾರೆ. ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿ ಇತರ ಕೃತಿಗಳನ್ನೂ ಕನ್ನಡದಲ್ಲಿ ಮೋಗ್ಲಿಂಗ್ ಬರೆದಿರುವನಲ್ಲದೆ ದಾಸರ ಪದಗಳು ಹಾಗೂ ಜೈಮಿನಿ ಭಾರತದ ಭಾಗಗಳನ್ನು ಜರ್ಮನ್ ಭಾಷೆಗೆ ಭಾಷಾಂತರಿಸಿ ಜರ್ಮನ್ ನಿಯತಕಾಲಿಕೆಗಳಲ್ಲಿ ಪ್ರಕಟಿಸಿ, ಕನ್ನಡ ಸಾಹಿತ್ಯದ ಹಿರಿಮೆಯನ್ನು ಐರೋಪ್ಯರಿಗೆ ಮಾಡಿಕೊಟ್ಟಿದ್ದಾನೆ.

ಪ್ರಪ್ರಥಮವಾಗಿ ವೈಜ್ಞಾನಿಕವಾದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಜರ್ಮನ್ ಭಾಷೆಯಲ್ಲಿ ಬರೆದು (೧೮೪೬) ಅದನ್ನು ಜರ್ಮನಿಯ ಟುಬಿಂಜೆನ್‌ನ ವಿದ್ವತ್ ಪತ್ರಿಕೆಯೊಂದರಲ್ಲಿ ಪ್ರಕಟಿಸಿದ ರೆವೆರೆಂಡ್ ವೈಗಲ್ ಇನ್ನೊಬ್ಬ ಗಣ್ಯ ಬಾಸೆಲ್ ಮಿಷನ್‌ನ ಉಪದೇಶಕ. (ಆತನ ಈ ಲೇಖನದ ಇಂಗ್ಲಿಷ್ ಭಾಷಾಂತರ ಇತ್ತೀಚೆಗೆ ೧೯೮೧ರಲ್ಲಿ—ಅಂಕ ೭೨— 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ'ಯಲ್ಲಿ ಡಾ॥ ಗೀತಾ ಧರ್ಮಪಾಲರಿಂದ ಮಾಡಲ್ಪಟ್ಟು ಪ್ರಕಟವಾಗಿದೆ). ೧೮೫೪ರಲ್ಲಿ ಪ್ರಕಟವಾದ ಬೈಬಲ್‌ನ ಹೊಸಒಡಂಬಡಿಕೆಯ ಕನ್ನಡ ಆವೃತ್ತಿಯಲ್ಲಿ ಈತನದು ಗಣ್ಯ ಪಾತ್ರವಿದೆ.

ರೆವೆರೆಂಡ್ ವರ್ತ್ ಪ್ರಕಟಿಸಿದ 'ಪ್ರಾಕ್ಕಾವ್ಯ ಮಾಲಿಕೆ' (೧೮೬೮) ಕನ್ನಡ ಕಾವ್ಯಗಳ ಹಾಗೂ ಕವಿತೆಗಳ ಪ್ರಾತಿನಿಧಿಕ ಸಂಕಲನವಾಗಿ ಕನ್ನಡ ಪಠ್ಯ ಪುಸ್ತಕವೂ ಆಯಿತು. ಇದರಲ್ಲಿ ಕ್ರೈಸ್ತರು ರಚಿಸಿದ ಹೊಸಕನ್ನಡ ಕವಿತೆಗಳೂ ಇವೆ. 'ಇಸೋಪನ ನೀತಿಕತೆ' ಮುಂತಾದ ಇತರ ಕೃತಿಗಳೂ ಇವರ ಪ್ರಕಟಣೆಗಳು.

ತುಳು ಭಾಷೆಯಲ್ಲಿ 'ಮತ್ತಾಯನ ಸುವಾರ್ತೆ' (೧೮೪೨),

ತುಳು ಬೈಬಲ್ (೧೮೫೮) ಎಂಬ ಬರಹಗಳನ್ನು ಬಾಸೆಲ್ ಮಿಶನ್‌ರವರು ಕನ್ನಡ ಲಿಪಿಯಲ್ಲಿ ಪ್ರಕಟಿಸಿದ್ದಲ್ಲದೆ ರೆವೆರೆಂಡ್ ಮೆನರ್ ತುಳು ಪಾಡ್ದನಗಳನ್ನು ಸಂಗ್ರಹಿಸಿ 'ಇಂಡಿಯನ್ ಎಂಟಿಕ್ವೇರಿ'ಯಲ್ಲಿ ಪ್ರಕಟಿಸಿದರು. ತುಳು ನಿಘಂಟು (೧೮೮೬) ಕೂಡ ಇವರದೇ ಸಾಧನೆ.

ರೆವೆರೆಂಡ್ ಫರ್ಡಿನಾಂಡ್ ಕಿಟ್ಟೆಲ್ (೧೮೩೨-೧೯೦೩) ಕನ್ನಡಕ್ಕೆ ಸೇವೆ ಸಲ್ಲಿಸಿದ ಬಾಸೆಲ್ ಮಿಶನ್‌ನ ಉಪದೇಶಕ ವಿದ್ವಾಂಸರಲ್ಲಿ ಅತ್ಯಂತ ಉಲ್ಲೇಖನೀಯರು. ೧೮೫೩ಕ್ಕೆ ಮಂಗಳೂರಿಗೆ ಬಂದ ಅವರು ೧೮೬೬-೬೭ರಲ್ಲಿ ಮಡಿಕೇರಿಯಲ್ಲೂ ಇದ್ದರಲ್ಲದೆ ಧಾರವಾಡದ ಮಿಶನ್ ಹೈಸ್ಕೂಲಿನಲ್ಲೂ ಮುಖ್ಯೋಪಾಧ್ಯಾಯರಾಗಿದ್ದರು (೧೮೮೩). ಅವರ ಸ್ಮಾರಕವಾಗಿ ಅಲ್ಲಿ ಈಗ ಕಿಟೆಲ್ ಕಾಲೇಜು ಇದೆ. ಕನ್ನಡದಲ್ಲಿ ಕವಿತೆಗಳ ರಚನೆ, ಪತ್ರಿಕಾ ಪ್ರಕಟಣೆ, ಗ್ರಂಥ ಸಂಪಾದನೆ, ವ್ಯಾಕರಣ ರಚನೆ, ಕೊನೆಯದಾಗಿ ಕನ್ನಡ ನಿಘಂಟು ಇವುಗಳೆಲ್ಲ ಅವರ ಅಸಾಧಾರಣ ವಿದ್ವತ್ತಿಗೆ ಸಾಕ್ಷಿ. ಭಾರತೀಯ ಧಾರ್ಮಿಕ ಅಧ್ಯಯನದಲ್ಲೂ ಅವರದು ಎತ್ತಿದ ಕೈ. 'ಟ್ರ್ಯಾಕ್ಟ್ ಆನ್ ಸ್ಯಾಕ್ರಿಫೈಸ್' (೧೮೭೨) ಯಜ್ಞಗಳ ಬಗೆಗಿನ ಪರಿಚಯ ಗ್ರಂಥ. ಕೊಡಗಿನ ಜೀವನ, ದಾಸ ಹಾಗೂ ಶರಣ ಸಾಹಿತ್ಯಗಳ ಬಗೆಗೂ ಅವರ ಇಂಗ್ಲಿಷ್ ಲೇಖನಗಳು ಪ್ರಕಟವಾಗಿವೆ. 'ಕಥಾಮಾಲೆ'ಯಲ್ಲಿ ಕುಮಾರವ್ಯಾಸನ ಶೈಲಿಯಲ್ಲಿ (ಭಾಮಿನೀ ಷಟ್ಪದಿ) ಯೇಸುವಿನ ಕತೆ ಹೇಳಲಾಗಿದೆ :

ಒಂದು ದಿನದಲ್ಲೇಸು ತನ್ನೊಡ
ಬಂದ ಶಿಷ್ಯರಸಹಿತ ಹಡಗನ-
ನಂದಿನಂದದಿಯೇರಿ ಹೋಗಲಿಕಾ ಸಮಯದೊಳಗೇ ।

ಸುಂದರಾನಿಲ ಶಾಂತಿಯಿದ್ದೆಡೆ
ಮುಂದಘೋರದ ಕಂಪದೇಳಲ್
ಚಂದದಿಂದಲಿ ನಿದ್ದೆಮಾಡುತಲೇಸು ಮಲಗಿಹನು॥

('ಒಂದು ದಿನ ದುರ್ಯೋಧನನು ನಿಜ ಮಂದಿರದೊಳೇಕಾಂತದಲಿ ಮನನೊಂದು...' ಜ್ಞಾಪಿಸಿಕೊಳ್ಳಿ).

ಇದು ಕಿಟ್ಟೆಲರ ಅಪೂರ್ವ ಕನ್ನಡ ಖಂಡ ಕಾವ್ಯ. 'ವಿಚಿತ್ರ ವರ್ತಮಾನ ಸಂಗ್ರಹಂ' (೧೮೬೨) ಪತ್ರಿಕೆ, 'ಪರಮಾತ್ಮ ಜ್ಞಾನ' (೧೮೬೩), ನಾಗವರ್ಮನ ಕನ್ನಡ ಛಂದಸ್ಸು (೧೮೭೫) ಹಾಗೂ ಎಲ್ಲಕ್ಕೂ ಕಿರೀಟಪ್ರಾಯವಾದ, ಕನ್ನಡ ಭಾಷೆಯ ಘನತೆ, ಸಿರಿವಂತಿಕೆಗಳನ್ನು ಎತ್ತಿ ಹಿಡಿದ 'ಎ ಕನ್ನಡ ಇಂಗ್ಲಿಷ್ ಡಿಕ್ಶನರಿ' (೧೮೯೪) ಕಿಟ್ಟೆಲ್ಲರ ಇತರ ಬರಹಗಳು. ಕೊನೆಯ ಕೃತಿ ೧೫ ವರ್ಷಗಳಿಗೂ ದೀರ್ಘ ದುಡಿಮೆಯ ಅಮೂಲ್ಯ ಕೊಡುಗೆ ; ಬಾಸೆಲ್ ಮಿಶನ್‌ನವರು ಕನ್ನಡಕ್ಕೆ ಸಲ್ಲಿಸಿದ ಕಾಣಿಕೆಯ ಸೌಧಕ್ಕೆ ಚಿನ್ನದ ಕಳಶವಿಟ್ಟಂಥ ಬರಹ. ಕಣ್ಣು ಮಂಜಾದರೂ ಆರೋಗ್ಯ ಕೆಟ್ಟರೂ ತಪಸ್ಸಿನಂತೆ ಕಿಟ್ಟೆಲ್ಲರು ಮಾಡಿದ ಸಾಧನೆ.

ಕನ್ನಡ ನಾಡಿನಲ್ಲಿ ೧೦೦ರಷ್ಟು ಜರ್ಮನ್ ಮಿಶನರಿಗಳು ಬಾಸೆಲ್ ಮಿಶನ್ ಮೂಲಕ ದುಡಿದರು. ಕಲೆ, ಸಂಸ್ಕೃತಿ, ಸಾಹಿತ್ಯ, ಭಾಷೆಗಳ ವಿಕಾಸಕ್ಕೆ ನೆರವಾದರು. ಹೆಂಚು, ನೇಯ್ಗೆ, ಮುದ್ರಣ ಕೈಗಾರಿಕೆಗಳಿಗೆ ಹೆಚ್ಚಿನ ಚಾಲನೆ ನೀಡಿ, ಕೃಷಿಯಲ್ಲಿ, ವಿಶೇಷತಃ ಹಣ್ಣಿನ ತೋಟಗಾರಿಕೆಯಲ್ಲಿ ಕೆಲಸಮಾಡಿ, ಕರ್ನಾಟಕದ ಆರ್ಥಿಕ ಪ್ರಗತಿಗೆ ನೆರವಾದರು. ದಲಿತರನ್ನು ಮತಾಂತರಿಸಿಯೂ ಹಿಂದೂ ಸಮಾಜದ ಅಸ್ಪೃಶ್ಯತೆಯಂಥ ಮೌಢ್ಯಗಳ ಬಗ್ಗೆ ಟೀಕೆ ಮಾಡಿಯೂ ಹಿಂದೂ ಸಮಾಜದಲ್ಲಿ ನವಜಾಗೃತಿಗೆ ನೆರವಾದರು. ಅವರು ಮತಾಂತರಿಸಿದ ಜನರ ಸಂಖ್ಯೆ ಅತ್ಯಲ್ಪವಾದರೂ ಕಾರ್ಯವು-ಕಷ್ಟದ ದುಡಿಮೆ-ಒಂದು ಧಾರ್ಮಿಕ ಗುಣವೆಂದು ಆ ಜನಕ್ಕೆ ಅವರು ತಿಳಿಸಿಕೊಟ್ಟರು. ಹೊಸ ಹೆಂಚಿನ ಮಾಡಿನ ಹೊಸ ವಾಸ್ತುಶೈಲಿಯನ್ನು ರೂಢಿಗೆ ತಂದರು. ಸಾಹಿತ್ಯ, ಭಾಷೆಗಳ ವೈಜ್ಞಾನಿಕ ಅಧ್ಯಯನ, ನವ ಗದ್ಯ, ನವ ಭಾವಗೀತೆ, ಪತ್ರಿಕೋದ್ಯಮಗಳಿಗೆ ತಳಹದಿ ಹಾಕಿದರು. ಅನಾಥಾಲಯ, ಆಸ್ಪತ್ರೆ ತೆರೆದು ಜನತಾ ಸೇವೆಯ ಹೊಸ ಅಧ್ಯಾಯ ತೆರೆದರು. ಬಾಸೆಲ್ ಮಿಶನ್‌ನ ಒಂದೂವರೆ ಶತಮಾನದ ಸಾಧನೆ ಕರ್ನಾಟಕದ ನವೋದಯದ (ರಿನೇಸಾನ್ಸ್)ದ ಇತಿಹಾಸದಲ್ಲಿ ಒಂದು ಗಣ್ಯ ಅಧ್ಯಾಯ.